## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 2243
2. ಸದಸ್ಯರ ಹೆಸರು : ಶ್ರೀ ಬಿ.ಕೆ.ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ :26.03.2021
4. ಉತ್ತರಿಸುವ ಸಚಿವರು : ಮಾನ್ಯ ಮೂಲಸೌಲಭ್ಯ ಅಭಿವೃದ್ಧಿ, ಹಜ್ ಮತ್ತು ವಕ್ಫ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಶಿವಮೊಗ್ಗದಲ್ಲಿ ಏರ್ ಪೋರ್ಟ್ ನಿರ್ಮಾಣ ಯಾವ ಹಂತದಲ್ಲಿದೆ; (ವಿವರ ಒದಗಿಸುವುದು) | ಶಿವಮೊಗ್ಗ ವಿಮಾನ ನಿಲ್ದಾಣದ ಅಭಿವೃದ್ಧಿ ಕಾಮಗಾರಿಗಳನ್ನು ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪರಿವೀಕ್ಷಣೆಯಲ್ಲಿ ಲೋಕೋಪಯೋಗಿ ಇಲಾಖೆಯ ವತಿಯಿಂದ ಕೈಗೊಳ್ಳಲಾಗುತ್ತಿದ್ದು, ಪ್ರಸ್ತುತ ಹಂತ-1 ಪ್ಯಾಕೇಜ್-1ರ ಯೋಜನೆಯಡಿ ರನ್-ವೇ, ಟ್ಯಾಕ್ಸಿವೇ, ಏಪ್ರಾನ್, ಅಪ್ರೋಚ್ ರಸ್ತೆ, ಫೆರಿಫೆರಲ್ ರಸ್ತೆ ಮತ್ತು ಕಾಂಪೌಂಡ್ ಗೋಡೆಗಳ ನಿರ್ಮಾಣ ಕೈಗೊಳ್ಳಲಾಗಿದ್ದು, ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.<br><br>ಪ್ಯಾಕೇಜ್-2ರಡಿ ಟರ್ಮಿನಲ್ ಕಟ್ಟಡ, ಎಟಿಸಿ ಗೋಪುರ, ಫೈರ್ ಸ್ಟೇಷನ್ ಕಟ್ಟಡ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| (ಆ) | ಇದಕ್ಕಾಗಿ ಇದುವರೆವಿಗೂ ಬಿಡುಗಡೆಗೊಂಡ ಮತ್ತು ಖರ್ಚಾದ ಅನುದಾನವೆಷ್ಟು; ಕಾಮಗಾರಿ ಟೆಂಡರ್ ಯಾವ ಕಂಪನಿಗೆ ನೀಡಲಾಗಿದೆ? (ಮಾಹಿತಿ ಒದಗಿಸುವುದು) | ಶಿವಮೊಗ್ಗ ವಿಮಾನ ನಿಲ್ದಾಣದ ಕಾಮಗಾರಿಗಳಿಗಾಗಿ ಇದುವರೆವಿಗೂ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ನೋಡಲ್ ಸಂಸ್ಥೆಯಾದ ಕೆ.ಎಸ್.ಐ.ಐ.ಡಿ.ಸಿ ನಿಗಮ ನಿಯಮಿತಕ್ಕೆ ರೂ.74.61 ಕೋಟಿ ಅನುದಾನವನ್ನು ಬಿಡುಗಡೆಗೊಳಿಸಿದ್ದು, ಈ ಪೈಕಿ ಅನುಷ್ಠಾನ ಅಧೀಕಾರಿಯಾದ ಲೋಕೋಪಯೋಗಿ ಇಲಾಖೆಯಿಂದ ರೂ.33.57 ಕೋಟಿಗಳನ್ನು ವೆಚ್ಚ ಮಾಡಲಾಗಿದೆ.<br>ಶಿವಮೊಗ್ಗ ವಿಮಾನ ನಿಲ್ದಾಣ ನಿರ್ಮಾಣದ ಹಂತ-1 ಪ್ಯಾಕೇಜ್-1ರ ಕಾಮಗಾರಿಯನ್ನು ಶ್ರೀ ಇಬ್ರಾಹಿಂ ಶರೀಫ್, ಕ್ಲಾಸ್-1 ಗುತ್ತಿಗೆದಾರರು, ತೀರ್ಥಹಳ್ಳಿ ಇವರಿಗೆ ನೀಡಲಾಗಿದೆ. |

ಸಂಖ್ಯೆ:ಮೂಲಅಇ 55 ರಾಅವಿ 2021

(ಆನಂದ್ ಸಿಂಗ್)
ಮೂಲಸೌಲಭ್ಯ ಅಭಿವೃದ್ಧಿ, ಹಜ್ ಮತ್ತು ವಕ್ಫ್
ಸಚಿವರು